# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 750

ಮಾನ್ಯ ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು)

ವಿಷಯ : ಪ್ರವಾಸೋದ್ಯಮ ಇಲಾಖೆಯಿಂದ ಕೈಗೊಂಡಿರುವ ಯೋಜನೆಗಳ ಬಗ್ಗೆ

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

ಉತ್ತರಿಸುವ ದಿನಾಂಕ : 17-12-2018

| ಕ್ರ. ಸ | ಪ್ರಶ್ನೆ | ಉತ್ತರ |
|---|---|---|
| ಅ) | 2017-18ರಲ್ಲಿ ಪ್ರವಾಸೋದ್ಯಮ ಇಲಾಖೆಯು ಕೈಗೊಂಡಿರುವ ಯೋಜನೆಗಳಾವುವು; ಬಿಡುಗಡೆ ಮಾಡಿದ ಅನುದಾನ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | 2017-18 ನೇ ಸಾಲಿನಲ್ಲಿ ಇಲಾಖೆ ಕೈಗೊಂಡಿರುವ ಯೋಜನೆಗಳ ವಿವರಗಳು ಕೆಳಕಂಡಂತಿವೆ.<br>1. ರಾಜ್ಯದ ಪ್ರವಾಸಿ ತಾಣಗಳಿಗೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರವಾಸಿಗರನ್ನು ಆಕರ್ಷಿಸುವ ಸಂಬಂಧ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.<br>2. ಎಸ್.ಸಿ&ಎಸ್.ಟಿ ಹಾಗೂ ಹಿಂದುಳಿದ ವರ್ಗಗಳು ಮತ್ತು ಇತರೆ ವರ್ಗದ ಮಕ್ಕಳಿಗೆ ಕರ್ನಾಟಕ ದರ್ಶನ ಕಾರ್ಯಕ್ರಮ.<br>3. ಎಸ್.ಸಿ&ಎಸ್.ಟಿ ಹಾಗೂ ಹಿಂದುಳಿದ ವರ್ಗಗಳು ಮತ್ತು ಇತರೆ ವರ್ಗದ ನಿರುದ್ಯೋಗಿಗಳಿಗೆ ಪ್ರವಾಸಿ ಟ್ಯಾಕ್ಸಿ ಖರೀದಿಸಲು ಸಹಾಯಧನ.<br>4. ಹೋಟೆಲ್ ಯೋಜನೆಗಳಿಗೆ ಸಹಾಯಧನ.<br>5. ಪ್ರವಾಸಿ ತಾಣ ಸಂಪರ್ಕಿಸುವ ರಸ್ತೆಗಳ ಅಭಿವೃದ್ಧಿ<br>6. ಪ್ರವಾಸಿ ತಾಣಗಳಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಕಾಮಗಾರಿ<br>7. ಕರ್ನಾಟಕ ಟೂರಿಸಂ ವಿಷನ್ ಗ್ರೂಪ್ ಶಿಫಾರಸ್ಸು ಮಾಡಿರುವ ಯೋಜನೆಗಳು.<br>2017-18 ನೇ ಸಾಲಿನಲ್ಲಿ ಬಿಡುಗಡೆಯಾಗಿರುವ ಅನುದಾನದ ವಿವರಗಳುಳ್ಳ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಆ) | ಕರಾವಳಿ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ CRZ ಮೀಸಲಾತಿ ಪಡೆದು ಯೋಜನೆ ಕೈಗೊಳ್ಳಲಾಗಿದೆಯೇ; ಕೈಗೊಂಡಿದ್ದಲ್ಲಿ ವಿವರ ನೀಡುವುದು. | ದಕ್ಷಿಣ ಕನ್ನಡ, ಉಡುಪಿ, ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿರುವ ಪ್ರಮುಖ ಕಡಲ ತೀರಗಳಲ್ಲಿ ಪ್ರವಾಸಿ ಸೌಲಭ್ಯಗಳನ್ನು ಕಲ್ಪಿಸುವ ಸಂಬಂಧ ಸಿ.ಆರ್.ಜೆಡ್. ನಿಯಮಗಳನ್ನು ಸಡಿಲಿಸಲು ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯಕ್ಕೆ ದಿನಾಂಕ 16/08/2013 ರಂದು ಪ್ರಸ್ತಾವನೆ ಸಲ್ಲಿಸಲಾಗಿತ್ತು. ಕೇಂದ್ರ ಪರಿಸರ ಮತ್ತು ಅರಣ್ಯ ಮಂತ್ರಾಲಯ ದಿನಾಂಕ: 18/04/2018 ರಂದು ಸಿ.ಆರ್.ಝಡ್ ಸಡಿಲಿಕೆ ಕುರಿತು ಕರಡು ಅಧಿಸೂಚನೆ ಪ್ರಕಟಿಸಿ ಅಭಿಪ್ರಾಯ/ಆಕ್ಷೇಪಣೆಗಳನ್ನು ಸಲ್ಲಿಸಲು ಕೋರಿರುತ್ತದೆ. ಇಲಾಖೆಯ ಅಭಿಪ್ರಾಯ/ಆಕ್ಷೇಪಣೆಗಳನ್ನು ದಿನಾಂಕ:14-06-2018 ರಂದು ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ಕೋಸ್ಟಲ್ ಜೋನ್ ಮ್ಯಾನೇಜಮೆಂಟ್ ಅಥಾರಿಟಿ, ಬೆಂಗಳೂರು ರವರಿಗೆ ಸಲ್ಲಿಸಲಾಗಿದ್ದು, ಅಂತಿಮ ಅಧಿಸೂಚನೆ ನಿರೀಕ್ಷಿಸಲಾಗಿದೆ. |
| (ಇ) | CRZ ವಿನಾಯಿತಿಗೆ ನಿಯಮದಲ್ಲಿ ಸರಳೀಕರಣಕ್ಕೆ ಪ್ರವಾಸೋದ್ಯಮ ಇಲಾಖೆಯಿಂದ ಸಲ್ಲಿಸಿದ ಪ್ರಸ್ತಾವನೆಗಳಾವುವು; (ವಿವರ ಒದಗಿಸುವುದು) ಪ್ರಸ್ತಾವನೆ ಯಾವ ಹಂತದಲ್ಲಿದೆ ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| (ಈ) | ಕರಾವಳಿ ಬೀಚುಗಳಲ್ಲಿ ಶಾಶ್ವತ ಕಟ್ಟಡ ನಿರ್ಮಿಸಲು ಅನುಮತಿ ನೀಡಲಾಗಿದೆಯೇ; ನೀಡಿದ್ದಲ್ಲಿ, ಎಷ್ಟು ಮತ್ತು ಯಾವ ಕಡೆಗಳಲ್ಲಿ ಅನುಮತಿ ನೀಡಲಾಗಿದೆ; (ವಿವರ ಒದಗಿಸುವುದು) | ಸಿ.ಆರ್.ಜೆಡ್. ನಿಯಮಗಳನ್ವಯ ಅನುಮತಿ ನೀಡಲಾಗುತ್ತದೆ. |

| | | |
|---|---|---|
| (ಉ) | ಕರಾವಳಿ ಕರ್ನಾಟಕಕ್ಕೆ ಪ್ರವಾಸೋದ್ಯಮ ಇಲಾಖೆಯಲ್ಲಿ ಪ್ರವಾಸೋದ್ಯಮ ಅಭಿವೃದ್ಧಿ ಪಡಿಸಲು ಕೇಂದ್ರ ಸರ್ಕಾರದಿಂದ ಪಡೆಯಲಾದ ಅನುದಾನ ಎಷ್ಟು; | 1. ದಕ್ಷಿಣ ಕನ್ನಡ, ಉತ್ತರ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿರುವ 22 ಪ್ರಮುಖ ಬೀಚ್‌ಗಳಲ್ಲಿ ಸಂಪರ್ಕ ರಸ್ತೆ, ಆಸನ ಸೌಲಭ್ಯ, ಸೇಲ್ಟರ್, ವಾಚ್ ಟವರ್, ಪಾರ್ಕಿಂಗ್ ಸೌಲಭ್ಯ, ಐಮಾಸ್ ಲೈಟಿಂಗ್ ಮುಂತಾದ ಸೌಲಭ್ಯಗಳನ್ನು ರೂ.50.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಕಲ್ಪಿಸಲು ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯವು ಮಂಜೂರಾತಿ ನೀಡಿ ಮೊದಲ ಕಂತಾಗಿ ರೂ.10.00 ಕೋಟಿಗಳನ್ನು ಬಿಡುಗಡೆ ಮಾಡಿದೆ.<br><br>2. ಸ್ವದೇಶ ದರ್ಶನ್ ಯೋಜನೆಯಡಿ ರಾಜ್ಯದ ದಕ್ಷಿಣ ಕನ್ನಡ, ಉಡುಪಿ, ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿರುವ ಕಡಲ ತೀರಗಳಲ್ಲಿ ಪ್ರವಾಸಿ ಸೌಲಭ್ಯಗಳನ್ನು ಕಲ್ಪಿಸಲು ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯವು ರೂ.95.67 ಕೋಟಿಗಳನ್ನು ಮಂಜೂರು ಮಾಡಿ ರೂ.19.13 ಕೋಟಿಗಳನ್ನು ಮೊದಲ ಕಂತಾಗಿ ಬಿಡುಗಡೆ ಮಾಡಿದೆ. |
| (ಊ) | ನೀರಿನಲ್ಲಿ ತೇಲುವ ಕ್ರೂಜ್ ಹಡಗುಗಳನ್ನು ಪ್ರಾರಂಭಿಸಲಾಗಿದೆಯೇ; ಇದಕ್ಕೆ ಸಹಾಯಧನ ನೀಡಲಾಗುತ್ತಿದೆಯೇ? (ವಿವರ ಒದಗಿಸುವುದು) | 1) ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಫಲ್ಗುಣಿ ನದಿ (ಸುಲ್ತಾನ್ ಭತ್ತೇರಿ ಪ್ರದೇಶ)(ಗುರುಪುರಾ ನದಿ) ಪ್ರದೇಶದಲ್ಲಿ ಒಂದು ಕ್ರೂಸ್ ರೆಸ್ಟೋರೆಂಟ್ ಪ್ರಾರಂಭಿಸಲು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ದಕ್ಷಿಣ ಕನ್ನಡ ವತಿಯಿಂದ ಅನುಮತಿ ನೀಡಲಾಗಿದೆ.<br>2) ಮಂಗಳೂರು ತಾಲ್ಲೂಕಿನ ಹಳೆ ಬಂದರು ಪ್ರದೇಶದಲ್ಲಿ ಫಲ್ಗುಣಿ ನದಿ ಪ್ರದೇಶದಲ್ಲಿ ಒಂದು ಕ್ರೂಸ್ ರೆಸ್ಟೋರೆಂಟ್ ಪ್ರಾರಂಭಿಸಲು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ದಕ್ಷಿಣ ಕನ್ನಡ ವತಿಯಿಂದ ಅನುಮತಿ ನೀಡಲಾಗಿದೆ.<br>3) ಕ್ರೂಸ್ (ವಿಹಾರ ನೌಕಾಯಾನ) ಪ್ರವಾಸೋದ್ಯಮ ಯೋಜನೆಗಳಿಗೆ ಸಹಾಯಧನ ನೀಡಲು ಪ್ರವಾಸೋದ್ಯಮ ನೀತಿ 2015–20 ರಲ್ಲಿ ಅವಕಾಶ ಕಲ್ಪಿಸಲಾಗಿದೆ. |

ಪ್ರಇ 149 ಪ್ರವಾವಿ 2018

(ಸಾ.ರಾ.ಮಹೇಶ್)
ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

ವಿಧಾನ ಪರಿಷತ್ತಿನ ಪ್ರಶ್ನೆ ಸಂಖ್ಯೆ : 750

ಅನುಬಂಧ

## 2017-18 ನೇ ಸಾಲಿನಲ್ಲಿ ಹಮ್ಮಿಕೊಂಡಿದ್ದ ಯೋಜನೆಗಳ ವಿವರ

| ಕ್ರ.ಸ | ಯೋಜನೆಯ ವಿವರ | ಒದಗಿಸಿದ್ದ ಅನುದಾನ | ವೆಚ್ಚ | ಕೈಗೊಂಡಿರುವ ಕಾಮಗಾರಿಗಳು |
|---|---|---|---|---|
| 1 | 3452-80-104-0-01-051-GE Promotion & Publicity | 56.01 | 55.67 | ಪ್ರವಾಸೋದ್ಯಮ ಪ್ರಚಾರ ಕಾರ್ಯಕ್ರಮಗಳಿಗೆ ವೆಚ್ಚ ಮಾಡಲಾಗಿದೆ |
| 2 | 3452-80-104-0-01-059-OE-Promotion & Publicity | 71.41 | 71.20 | ಪ್ರಚಾರ ಕಾರ್ಯಕ್ರಮಗಳು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿಗಳಿಗೆ ಅನುದಾನ ಬಿಡುಗಡೆ, ಓಬಿಸಿ ಮಕ್ಕಳಿಗೆ ಕರ್ನಾಟಕ ದರ್ಶನ ಪ್ರವಾಸ, ಸೈನೇಜುಗಳ ಅಳವಡಿಕೆ, ಕಛೇರಿ ಬಾಡಿಗೆ ವೆಚ್ಚ, ವಾಹನಗಳ ಖರೀದಿ, ಹಾಲೇಜ್ ವೆಚ್ಚ, ಪೀಠೋಪಕರಣ ಖರೀದಿ, ಫುಡ್‌ಕ್ರಾಫ್ಟ್ ಸಂಸ್ಥೆ ಸಿಬ್ಬಂಧಿ ವೇತನ, ಪ್ರವಾಸಿ ಮಿತ್ರರ ವೇತನ, ಡಿ.ಟಿ.ಸಿ ಗಳ ವೇತನ ಮುಂತಾದ ಬಾಬ್ತು ವೆಚ್ಚ ಮಾಡಲಾಗಿದೆ. |
| 3 | 3452-80-104-0-04-059-OE- Hotel Subsidy | 39.52 | 39.52 | ಹೋಟೆಲ್ ಯೋಜನೆಗಳಿಗೆ ಸಹಾಯಧನ ಬಿಡುಗಡೆ ಮಾಡಲು ವೆಚ್ಚಮಾಡಲಾಗಿದೆ. |
| 4 | 5452-01-800-0-10-436 Nabard Works roads | 63.90 | 63.90 | ನಬಾರ್ಡ್ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ವೆಚ್ಚ ಮಾಡಲಾಗಿದೆ. |
| 5 | 5452-01-800-0-14-132-Capital Expenses | 184.78 | 182.58 | ಪ್ರವಾಸಿ ಮೂಲ ಸೌಲಭ್ಯ ಅಭಿವೃದ್ಧಿ ಕಾಮಗಾರಿಗಳಿಗೆ ವೆಚ್ಚ ಮಾಡಲಾಗಿದೆ. |
| 6 | 3452&5452-422-SCP | 20.18 | 20.17 | ಪ.ಜಾತಿ/ಪ.ಪಂಗಡದ ಮಕ್ಕಳಿಗೆ ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ ಹಾಗೂ ಪ.ಜಾತಿ/ಪ.ಪಂಗಡದ ಅಭ್ಯರ್ಥಿಗಳಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸಲು ವೆಚ್ಚ ಮಾಡಲಾಗಿದೆ. |
| 7 | 3452&5452-423-TSP | 8.41 | 8.40 | |
| 8 | 5452-03-101-0-05-132-CE-Implimentaion of Kar. Tourism Vision Group Recommendations | 12.27 | 12.23 | ಕರ್ನಾಟಕ ಟೂರಿಸಂ ವಿಷನ್ ಗ್ರೂಪ್ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ವೆಚ್ಚ ಮಾಡಲಾಗಿದೆ. |
| | ಒಟ್ಟು | 456.48 | 453.67 | |